ತಾಂಬೂಲ ಸಂಸ್ಕೃತಿ
ಅದರ ಅಪೂರ್ವ
ಕಲಾಕೃತಿ

ಪ್ರಜಾವಾಣಿ ದೀಪಾವಳಿ ಸಂಚಿಕೆ
1997

# ತಾಂಬೂಲ ಸಂಸ್ಕೃತಿ: ಅದರ ಅಪೂರ್ವ ಕಲಾಕೃತಿ

ಎನ್. ಸಿ. ದೇಸಾಯಿ



'ವಿಡಾ' ಮಡಚಿದ ತಾಂಬೂಲ ಇಡುವ ಡಬ್ಬ ಒರಿಸ್ಸಾ, 18ನೇ ಶತಮಾನ

**ಭಾರತೀಯರ ಅವಿಭಾಜ್ಯ ಅಂಗವಾಗಿರುವ ತಾಂಬೂಲವು ನಮ್ಮ ಸೌಂದರ್ಯ ಪ್ರಜ್ಞೆಯ ಪ್ರತೀಕವೂ ಹೌದು. ಅದರ ಪೂರಕ ವಸ್ತುಗಳನ್ನಿಡುವ ಸಾಧನಗಳು ಅಪೂರ್ವ ಕಲಾಕೃತಿಗಳಾಗಿವೆ.**

ಗಜ ವಾಹನದ ಮೇಲೆ ಎಲೆ ಅಡಿಕೆ ಡಬ್ಬ ಒರಿಸ್ಸಾ, 19ನೇ ಶತಮಾನ

ಭಾರತೀಯರ ಸೌಂದರ್ಯ ಪ್ರಜ್ಞೆ ಬಹು ಹಿರಿದು. ಬೆಳಗಾಯಿತೋ ಮನೆ ಮುಂದಿನ ಅಂಗಳ ಸಾರಿಸಿ ರಂಗೋಲಿ ಇಕ್ಕಿದಾಗಲೇ ಸಮಾಧಾನ; ಮನೆ ಮುಂದೆ ತುಳಸಿಗಾಗಿ ಇರುವ ವೃಂದಾವನವೂ ಅಂದವಾಗಿರಬೇಕು. ಅದರ ಉತ್ತಮ ನಕ್ಷೆಗಾಗಿ ಎಂತಹ ಶ್ರಮ! ಅದು ಅಂದವಾದ ವರ್ಣಗಳಿಂದ ಮೈದಳೆಯಬೇಕು. ತುಳಸಿ ಅದೊಂದು ವನಸ್ಪತಿ ಎನ್ನಿ. ಆದರೆ ಅದಕ್ಕೊಂದು ದೈವೀಸ್ವರೂಪ ನೀಡಿ ವಂದಿಸುತ್ತೇವೆ. ಇದು ವನ, ವೃಕ್ಷಗಳ ಬಗ್ಗೆ, ಆರೋಗ್ಯದ ಬಗ್ಗೆ ಇರುವ ನಮ್ಮ ಶ್ರದ್ಧೆ. ಅದೇ ರೀತಿ ತಾಂಬೂಲದ್ದು.

ತಾಂಬೂಲವೂ ಭಾರತೀಯರ ಒಂದು ಅವಿಭಾಜ್ಯ ಅಂಗವೇ ಆಗಿದೆ. 'ತಾಂಬೂಲ'ದ್ದೇ ಒಂದು 'ಸಂಸ್ಕೃತಿ'ಯಾಗಿದೆ ಎಂದರೆ ಅತಿಶಯೋಕ್ತಿ ಏನಿಲ್ಲ. ಕಾಶ್ಮೀರದಿಂದ ಹಿಡಿದು ಕನ್ಯಾಕುಮಾರಿಯವರೆಗೂ ಅದನ್ನು ನಮ್ಮ ಜನ ಉಪಯೋಗಿಸುತ್ತಾರೆ. ಮೆದ್ದುವ ರೀತಿ, ಉಪಯೋಗಿಸುವ ವಿಧಾನಗಳು ಬೇರೆಯಾಗಿರಬಹುದು. ಆದರೆ ಅದಕ್ಕೆ ಬೇಕಾಗುವ ಮೂಲ ವಸ್ತುಗಳು ಮಾತ್ರ ಮೂರು ಅಡಿಕೆ, ಎಲೆ ಮತ್ತು ಸುಣ್ಣ. ಇವನ್ನು ಬ್ರಹ್ಮ (ಅಡಿಕೆ), ವಿಷ್ಣು (ಎಲೆ) ಮತ್ತು ಮಹೇಶ್ವರ (ಸುಣ್ಣ) ಹೀಗೆ ತ್ರಿಮೂರ್ತಿಗಳಿಗೆ ಹೋಲಿಸುವದುಂಟು.

ತಾಂಬೂಲಕ್ಕೆ ಈ ಮೂರು ವಸ್ತುಗಳೇ ಮಾತ್ರ ಸೀಮಿತವಾಗಿಲ್ಲ– ಅನೇಕ ಮಸಾಲೆಗಳೂ ಉಂಟು. ಅವೆಲ್ಲ ಸೇರಿದರೆ ಈ ತಾಂಬೂಲಕ್ಕೆ ಹದಿಮೂರು ಗುಣ ಕೂಡುತ್ತವೆ. ಅವೆಲ್ಲ ಸೇರಿದರೆ ಇದು ಕಾಮೋತ್ತೇಜನದ ವಸ್ತುವಾಗಿ ಪರಿಣಮಿಸುತ್ತದೆಂದು ವಾತ್ಸಾಯನ ಕಾಮಸೂತ್ರದಲ್ಲಿ, 18ನೇ ಶತಮಾನದ ಯೋಗ ರತ್ನಾಕರದಲ್ಲಿ ಹೇಳಲಾಗಿದೆ.



ಚಪ್ಪಟೆ ಎಲೆ ಅಡಿಕೆ ಡಬ್ಬ.
ಮಹಾರಾಷ್ಟ್ರ, 18ನೇ ಶತಮಾನ



ರಜತದಲ್ಲಿ ತಯಾರಾದ ಎಲೆ ಅಡಿಕೆ ಡಬ್ಬ
ಮಹಾರಾಷ್ಟ್ರ, 18ನೇ ಶತಮಾನ

## 'ತಾಂಬೂಲ' ಹೇಗೆ ಬಂತು?

ಇಂದ್ರನ ಆನೆ ನಾಗರಾಜನನ್ನು ಕಟ್ಟುವ ಕಂಬದ ಬಳಿಯಲ್ಲಿ ಒಂದು ಅದ್ಭುತ ಬಳ್ಳಿಯೊಂದು ಬೆಳೆದು ಬಂತು. ದೊಡ್ಡ ಎಲೆಯ ಈ ಬಳ್ಳಿಯಿಂದ ಒಂದು ಸುಮಧುರ ವಾಸನೆ ಹೊರಡತೊಡಗಿತು. ಈ ವಾಸನೆ ದೇವ ದೇವತೆಗಳಲ್ಲಿ ಒಂದು ಅಚ್ಚರಿಯನ್ನು ಮೂಡಿಸಿತು. ಇಂದ್ರನಿಗೆ ಇದರ ಬಗ್ಗೆ ತಿಳಿಯುವ ಆತುರವಾಯಿತು. ಧನ್ವಂತರಿಗೆ ಕರೆ ಹೋಯಿತು. ಸೂಕ್ಷ್ಮವಾಗಿ ವೀಕ್ಷಿಸಿದ ಧನ್ವಂತರಿ ಈ ಎಲೆಯಲ್ಲಿ ಒಂದು ವಿಶಿಷ್ಟವಾದ ಮಾದಕತೆಯಿದೆ; ಇದರ ರಸದಲ್ಲಿ ಆರೋಗ್ಯಕ್ಕೆ ಅನುಕೂಲವಾದ ಗುಣವಿದೆ ಎಂದು ಸಾರಿದನು.

ಈ ಬಳ್ಳಿ ಹೇಗೆ ಉದ್ಭವವಾಯಿತೆಂಬುದೂ ಒಂದು ವಿಚಿತ್ರ! ಅಮೃತ ಮಂಥನ ಮುಗಿದ ಮೇಲೆ ಅಮೃತವನ್ನು ಪ್ರಸಾದ ರೂಪವಾಗಿ ನೀಡಿದ ನಂತರ ಉಳಿದಿದ್ದ ಅಮೃತವನ್ನು ಮೋಹಿನಿಯು ನಾಗರಾಜನನ್ನು ಕಟ್ಟುವ ಕಂಬದ ಬಳಿ ಇರಿಸಿದ್ದಳಂತೆ. ಅದರಿಂದಲೇ ಈ ಬಳ್ಳಿ ಹೊರಹೊಮ್ಮಿದ್ದು.



ವೀಳ್ಯದೆಲೆ ತೋಟ

ನಾಗರಾಜನನ್ನು ಕಟ್ಟುವ ಕಂಬಕ್ಕೆ ಸುತ್ತಿಕೊಂಡು ಬೆಳೆದದ್ದಕ್ಕೋ ಏನೋ ಈ ಬಳ್ಳಿಗೆ ದೇವಭಾಷೆ ಸಂಸ್ಕೃತದಲ್ಲಿ 'ನಾಗವಲ್ಲಿ' 'ನಾಗವೇಲಿ' ಎಂದು ಕರೆದಿದ್ದಾರೆ. ಈ ಸಂದರ್ಭವನ್ನು ಸ್ಕಂದ ಪುರಾಣದಲ್ಲಿ ವಿವರಿಸಲಾಗಿದೆ.

ವೀಳ್ಯದೆಲೆ, ಅಡಕೆ ಮತ್ತು ಸುಣ್ಣ ಇವೇ ಮೂರು ವಸ್ತುಗಳು ತಾಂಬೂಲಕ್ಕೆ ಮೂಲವಾಗಿದ್ದರೂ ರುಚಿಗಾಗಿ, ಆರೋಗ್ಯಕ್ಕಾಗಿ ಯಾಲಕ್ಕಿ, ಜಾಜಿಕಾಯಿ, ಪತ್ರಿ, ಕೊಬ್ಬರಿ ಕೇಶಂ ಬಡಿಸೋಪು, ಸುಗಂಧ ದ್ರವ್ಯ ಮುಂತಾದ ಜಿನಸಿಗಳನ್ನು ಉಪಯೋಗಿಸುವದುಂಟು– ಈಗೀಗಂತೂ 'ಪಾನ್‌ಬಿಡಾ' ಅಂಗಡಿಗಳಲ್ಲಿ ಅದೇನು ಜಿನಸಿಗಳು? ಸವತೇಬೀಜ ಕೋತಂಬರಿ ಬೇಳೆ ಗುಲಕಂದ. ಚಟ್ನಿಯೆಂಬುವ ಸಿಹಿ ವಸ್ತು ಗುಲಗಂಜಿಯ ಸೊಪ್ಪು, ಚಮನ ಮುಂತಾದವುಗಳನ್ನು ಉಪಯೋಗಿಸುತ್ತಾರೆ. ಈ ವಸ್ತುಗಳಿಂದಾಗಿ 'ಬೀಡಾ'ದ ಬೆಲೆಯೂ ಹೆಚ್ಚುತ್ತಾ ಹೋಗುತ್ತದೆ.

ಮುಂಬೈಯಂಥ ಮಹಾನಗರದಲ್ಲಿ – ರಜತ ಮತ್ತು ಸುವರ್ಣಗಳ ಅರ್ಕನ್ನು

ಪಕ್ಷಿ ಮುಖ
ಮಹಾರಾಷ್ಟ್ರ, 18ನೇ ಶತಮಾನ



ಉಪಯೋಗಿಸುತ್ತಾರೆಂದು ಹೇಳುವದುಂಟು. ಮುಂಬೈ ನಗರಿಯ ಚೌಪಾಟಿಯಲ್ಲಿ ಕೆಲವು ಬೀಡಾ ಅಂಗಡಿಗಳಿವೆ. ಅಲ್ಲಿ ಇಂಥ ಬೀಡಾ ತಯಾರಿಸಿ ಮಾರುತ್ತಾರೆ. ಸಾಯಂಕಾಲ ಬಹುಕಾಲದವರೆಗೂ ಈ ವ್ಯಾಪಾರ ನಡೆಯುತ್ತದೆ, ಶ್ರೀಮಂತ ಜನರೇ ಹೆಚ್ಚಾಗಿ ಇಲ್ಲಿಯ ಗ್ರಾಹಕರು. ಎಷ್ಟು ಬೆಲೆಯಾದರೂ ಸರಿ ಕೊಂಡು ತಿಂದು ಬಂದ ಕಾರಿನಲ್ಲಿ ಮರಳುತ್ತಾರೆ.

ಮುಂಬೈಯಲ್ಲಿ ಈ ಪಾನ್‌ಸಂಸ್ಕೃತಿ ಅಂದರೆ 'ಪಾನಬೀಡಾ' ಬಂದುದು ಬಹುಶಃ ಉತ್ತರ ಭಾರತದಿಂದಲೇ ಎಂದು ಹೇಳಬೇಕು— ಇಂದು ಇದೇ ಪದ್ಧತಿ ಭಾರತದ ಎಲ್ಲ ನಗರಗಳಿಗೂ ಹಳ್ಳಿಗಳಿಗೂ ಹಬ್ಬಿದೆ. ಈಗ್ಗೆ 50–55 ವರ್ಷಗಳ ಹಿಂದಿನ ಮಾತು. ಹುಬ್ಬಳ್ಳಿಯಲ್ಲಿ— ಅಂದರೆ ಆಗ್ಗೆ ನನಗೆ ಹುಬ್ಬಳ್ಳಿಯೇ ಆದರ್ಶ ನಗರ— ಇಂದಿನ ತರಹದ ಪಾನು ವಿವಿಧ ಮಸಾಲೆಗಳು, ಚಟ್ನಿಗಳು, ಗುಲಕಂದ, ಗುಲಗಂಜಿ ಸೊಪ್ಪು, ಇನ್ನೇನೊ ಇರುತ್ತಿರಲಿಲ್ಲ. ಎಲೆಯ ಮಧ್ಯ ಅಡಿಕೆ ಚಮನ, ಹಾಕಿ— ದುಂಡಿಗೆ ಸುತ್ತಿ ಒಂದು ಲವಂಗವನ್ನು ಚುಚ್ಚಿ ಮೇಲಷ್ಟು ಕೊಬ್ಬರಿಯ ತುರಿಯನ್ನು ಉದುರಿಸಿದರೆ ಆಯಿತು— ಈಗಿನ ಈ ಶಹರಗಳ ಮಸಾಲೆಪಾನನ್ನು ನಾನು ಮೊದಲು ಕಂಡುದು ಮುಂಬೈಯಲ್ಲೇ. ಪಾನಗಳ ವೈವಿಧ್ಯತೆ— ಅಂದರ ಬೇರೆ ಬೇರೆ ವೀಳ್ಯದೆಲೆಯ ಹೆಸರುಗಳನ್ನು ಪಾನ್‌ಗಳ ಅಲ್ಲಿಯೇ— ಬನಾರಸಿ ಪಾನ, ಕಲಕತ್ತಾಪಾನ, ಅಂಬಾಡಿ ಮುಂತಾದವುಗಳೆಲ್ಲ ಗೊತ್ತಾದುದು ಆ ನಗರಿಯಲ್ಲೇ.

ಈಗ ಈ ಎಲೆಗಳಲ್ಲಿ ಇನ್ನೂ ವೈವಿಧ್ಯತೆಗಳಿವೆಯೆಂದು ಗೊತ್ತಾಗುತ್ತಿದೆ, ಮಹಾರಾಜಪುರಿ, ಮೊಹಬಾ, ಮಸಾಲಪುರಿ, ಮಘಾಯಿ, ಜಗನ್ನಾಥಪುರಿ, ಸಂಧುವಾ, ಕಲಕತ್ತಾ, ಕೊಸಾಕೋಡಿ, ಪಟ್ಟುಕೋಡಿ, ಪುದುಕೊಡಿ, ಸತ್ಯನ್ಮಾಪದಮ್, ಕರ್ರಿಬಲಿ (ಕರಿಬಳ್ಳಿ— ಇರಬೇಕು) ಕರ್ಪೂರಲಾಕೊಡಿ, ದೇಸಿ ಬಿಲ್ಹಾರಿ, ದೇಸಾವರಿ, ಸೋಫಿಯಾ, ಮದ್ರಾಸಿ, ಬನಾರಸಿ ಹಾಗೂ ದೇಸಿ, ಎಂದು ಮುಂತಾದ ಮೂವತ್ತು ವೈವಿಧ್ಯದ ಬಳ್ಳಿಗಳಿವೆಯೆಂದು ತಿಳಿಯುತ್ತದೆ!

ಪಾನ್ ಬೀಡಾಗಳಲ್ಲಿ— ವಿವಿಧ ಮಸಾಲೆ— ಬೇರೆ ಬೇರೆ ಜಾತಿಯ ಎಲೆಗಳನ್ನು ಉಪಯೋಗಿಸಿದಂತೆ, ಪಾನ್‌ಗಳನ್ನು ಕಟ್ಟುವಲ್ಲಿಯೂ ವಿವಿಧ ರೀತಿಯ ಆಕಾರಗಳು ನಿರ್ಮಿತವಾಗುತ್ತಿವೆ. ಅವಕ್ಕೂ ಕೆಲ ಹೆಸರುಗಳಿವೆ: ಗೋವಿಂದಬಿಡಾ, ಕಪೂರಬಿಡಾ, ಕುಲ್ಪಿಬಿಡಾ, ಮೊಡಬಿಡಾ, ಮೋದಕಬಿಡಾ, ಕಾತರಬಿಡಾ, ಗ್ಲೋಂದಬಿಡಾ, ಮುಂತಾದ ಕೆಲವು ಆ ಬೀಡಾಗಳ ಹೆಸರುಗಳು. ಕೆಲವರು ಇವನ್ನು ಕಟ್ಟುವಲ್ಲಿ ಸ್ವಂತ ಕಲಾಕೃತಿಯನ್ನು ನಿರ್ಮಿಸುತ್ತಾರೆ.

ಪಾನ್‌ಬೀಡಾ ತಯಾರಿಸುವಲ್ಲಿ ಎಂತಹ



ನವಿಲಿನಾಕಾರದ ಎಲೆ ಅಡಿಕೆ ಡಬ್ಬ
ರಾಜಸ್ಥಾನ, 19ನೇ ಶತಮಾನ



ಪ್ರೇಮಿಗಳು—ಅಡಿಕೆ ಕತ್ತರಿಸುವಾಗ ಗೆಜ್ಜೆಯ
ನೂಪುರದ ಶಬ್ದ. ಮಹಾರಾಷ್ಟ್ರ, 18ನೇ ಶತಮಾನ

ಕಲಾ ನೈಪುಣ್ಯವನ್ನು ಉಪಯೋಗಿಸುತ್ತಾರೊ, ಅದೇ ರೀತಿ- ಪಾನ್ ಸಾಹಿತ್ಯಕ್ಕೆ ಬೇಕಾಗುವ ಸಲಕರಣೆಗಳನ್ನು ತಯಾರಿಸುವಲ್ಲಿಯೂ ಭಾರತೀಯರ ಸೌಂದರ್ಯ ಪ್ರಜ್ಞೆ ಹಿರಿದಾಗಿಯೇ ಇದೆ. ಅವುಗಳ ರೂಪ, ಕಲಾ ನೈಪುಣ್ಯಗಳನ್ನು ವರ್ಣಿಸಲು ಶಬ್ದಗಳಲ್ಲಿ ಸಾಧ್ಯವೇ ಇಲ್ಲ. ಚಿತ್ರಗಳನ್ನೇ ನೋಡಿ ತಣಿಯಬೇಕು, ಸುಣ್ಣದ ಡಬ್ಬಿ, ಸುಣ್ಣಹಚ್ಚುವ ಕಡ್ಡಿ, ಅಡಕೋತು, ಎಲೆ ಅಡಿಕೆ ಮಸಾಲೆ ಇರಿಸುವ ಡಬ್ಬಿ, ಎಲ್ಲವೂ ಅತ್ಯಂತ ಕಲಾಪೂರ್ಣವಾಗಿಯೇ ನಿರ್ಮಾಣವಾಗಿವೆ— ಇವುಗಳ ರೂಪ ಕಾಲಕ್ಕೆ ಬದಲಾದಂತೆ— ಪ್ರಾದೇಶಿಕವಾಗಿಯೂ ವೈವಿಧ್ಯವಾಗಿವೆ.

ಪೌರಾಣಿಕವಾಗಿ ತಾಂಬೂಲ ಸಂಸ್ಕಾರ ಸಂದರ್ಭ 'ಅಮೃತ ಮಂಥನದ' ಕಾಲವನ್ನ ಹೇಳಿದರೆ ಐತಿಹಾಸಿಕವಾಗಿ— ಹನ್ನೆರಡನೇ ಶತಮಾನದ ಚಾಲುಕ್ಯ ಸಾಮ್ರಾಟ ಸೋಮೇಶ್ವರನ ಕಾಲಕ್ಕೇ ಸಿಗುತ್ತದೆ. ವೀಳ್ಯ ಸವಿಯುವುದು ಅಷ್ಟ ಸೌಖ್ಯಗಳಲ್ಲೊಂದು ಎಂಬುದೇ ಅದರ ತಾತ್ಪರ್ಯವಾಗಿದೆ. ಆ ಅಷ್ಟವು ವಸ್ತುಗಳ ಕನೆ— ಖವಾದಂತಹ ಖಾದ್ಯ, ಸುವಾಸಿತ ಪದಾರ್ಥ, ಸ್ತ್ರೀ, ವೇಷಭೂಷ, ಸಂಗೀತ, ವೀಳ್ಯದೆಲೆ, ಅಡಿಕೆ ಶಯನ ಮತ್ತು ಪಂಚಪಕ್ವಾನ್ ಇವೆಲ್ಲ ಆ ಎಂಟು ವಸ್ತುಗಳಲ್ಲಿ ವಿವರಿಸಿದ ವಸ್ತುಗಳಾಗಿವೆ!

## ಶೃಂಗಾರ ಮತ್ತು ತಾಂಬೂಲ

ಶೃಂಗಾರ, ಪ್ರಣಯ, ಕಾಮಕೇಳಿಗಳಲ್ಲಿ ತಾಂಬೂಲದ ಸ್ಥಾನ ಬಹು ಹಿರಿದು ಎಂದೇ ಹೇಳಬೇಕು. ಈ ವಿಷಯದಲ್ಲಿ ಅತ್ಯಂತ ಪ್ರಾಚೀನ ಶಾಸನ ಸಿಗುವದು ಮಂಡಾಸೋರ ರೇಶಿಮೆ ನೇಕಾರ ಬಗ್ಗೆ ಇರುವ ಶಾಸನ. ಆ ಲಿಪಿಯ ಒಕ್ಕಣಿಕೆ ನನಗೆ ದೊರೆತುದು ಇಂಗ್ಲಿಷ್ ಭಾಷೆಯಲ್ಲಿಯೇ. ಅದನ್ನು ಹಾಗೇ ತಿಳಿಸುವದು ಉತ್ತಮವೆಂದು ಕಾಣುತ್ತದೆ:

....... a Woman though endowed with youth and beauty (and) adorned with the arrangement of golden necklaces and better leares and flowers, goes not to meet (her) lover in a secret place until She has put on a pair coloured silken cloth......

ಮರಾಠಿಗಳ ಮದುವೆಯ ಸಂದರ್ಭದಲ್ಲಿಯ ರೀತಿ ಇನ್ನೊಂದು ತೆರ. ನವದಂಪತಿಗಳು ಆ ಪದ್ಧತಿಯನ್ನು ಪಾಲಿಸಲೇಬೇಕು. ವಧು ಸಿದ್ಧವಾದ 'ವಿಡ'ವನ್ನು ತನ್ನ ಬಾಯಲ್ಲಿ ಹಿಡಿದಿರುತ್ತಾಳೆ. ವರ ಅದನ್ನು ತನ್ನ ಹಲ್ಲಿನಿಂದಲೇ ಕಚ್ಚಿ ಕಿತ್ತುಕೊಳ್ಳಬೇಕು. ಎಂತಹ ಮೋಜು ಏನು ಶೃಂಗಾರ, ಕಾಮ ಕೇಳಿಗೆ ಈ ಚುಂಬನ ಪ್ರಥಮ ಪಾಠವೇ?! ಈ ಕೃತಿಗೆ ಮರಾಠಿಗರು 'ವಿಡಿ' ಎಂದೇ ಕರೆಯುತ್ತಾರೆ. ಅಳಿಯನಿಗೆ ನೀಡಬೇಕಾದ ವಸ್ತುಗಳಲ್ಲಿ

ಪಶು ಮುಖ
ಗಿಳಿಯಾಕಾರದ ಅಡಕೋತು
ಆಂಧ್ರಪ್ರದೇಶ, 19ನೇ ಶತಮಾನ

ತಾಂಬೂಲದ ಡಬ್ಬಿ ಇರಲೇಬೇಕು. ಶ
ಪ್ರಸ್ತದ ರಾತ್ರಿ ಆ ಡಬ್ಬಿ ತಾಂಬೂ
ವಸ್ತುಗಳಿಂದ ಕೂಡಿದ್ದಾಗಿರಬೇಕು.
ವಾತ್ಸಾಯನನು ತನ್ನ ಕಾಮ ಸೂತ್ರ
ತಾಂಬೂಲದ ಸ್ಥಾನದ ಬಗ್ಗೆ ವಿವರಿಸಿದ್ದಾ

ನಮ್ಮ ಕಾಮಶಾಸ್ತ್ರ ಲೀಲಾವಿನೋ
ಸಂಗೀತ, ನಾಟ್ಯ, ನಾಟಕ ಕಾವ್ಯ ಎಲ್ಲರಲ್ಲಿಯೂ ಶೃಂಗಾರದ ಸಂದರ್ಭ ಬಂದಲ್ಲಿ ತಾಂಬೂಲವಿರಲೇಬೇಕು! ಅದರ ವಿಶ್ಲೇಷಣೆ ಬರಲೇಬೇಕು.

ಪ್ರಣಯದಾಟದಲ್ಲಂತೂ ಸರಿ, ತಾಂಬೂಲ ದೇವಕಾರ್ಯಗಳಲ್ಲೂ ಅವಶ್ಯ. ಅಷ್ಟೇಕೆ ಯಾವುದೇ ಸಂದರ್ಭಕ್ಕೂ ವಿಘ್ನೇಶನಿಗೆ ಪ್ರಥಮ ಪೂಜೆ. ವೀಳ್ಯದೆಲೆಯ ಮೇಲೆ ಕೊಬ್ಬರಿ ಬಟ್ಟಲಲ್ಲಿ ಅಕ್ಕಿಯನ್ನು ತುಂಬಿ ಒಂದು ಅಡಕೆ ಬೆಟ್ಟವನ್ನಿಟ್ಟು ಅದಕ್ಕೇ ವಿಘ್ನೇಶನ ರೂಪುಕೊಟ್ಟು ಪೂಜೆ ಪ್ರಾರಂಭಿಸುವದಿಲ್ಲವೆ?

ತಾಂಬೂಲ ಸೇವನೆ ದೇಶದ ಉದ್ದಗಲಕ್ಕೂ ಹರಡಿದ್ದು, ಊಟವಾದ ಮೇಲೆ ರುಚಿಗೆ ಆರೋಗ್ಯಕ್ಕೆ ಅಭ್ಯಾಸವಿದ್ದ ಈ ಪದ್ಧತಿಗೆ 16–17ನೇ ಶತಮಾನದಲ್ಲಿ ಹೊಗೆ ಸೊಪ್ಪು (ತಂಬಾಕು) ಸೇವನೆ ಸೇರಿತು. ಹೊಗೆಸೊಪ್ಪನ್ನು ಪರಿಚಯಿಸಿದವರು ಪೋರ್ಚುಗೀಸರು. 17ನೇ ಶತಮಾನದಲ್ಲಿ ಹೊಗೆಸೊಪ್ಪು ಸೇವನೆ ಭಾರತ ಮತ್ತು ಚೀನಾದಲ್ಲಿ ಹರಡಿತು. ಹೊಗೆಸೊಪ್ಪು ನುಂಗುವ ವಸ್ತುವಲ್ಲ, ಇದರ ಜೊತೆಗೆ ತಾಂಬೂಲದ ರುಚಿಕರ– ಆರೋಗ್ಯಕರ (ಮಸಾಲೆ) ಜಿನಸಿಗಳಿಗೂ ವರ್ಜ್ಯ– ಬಾಯಲ್ಲಿ ಸಿದ್ಧವಾದ ರಸವನ್ನು ನುಂಗುವಂತಿಲ್ಲವಾದ್ದರಿಂದ ಅದನ್ನು ಉಗುಳಬೇಕು, ಇದರಿಂದಾಗಿ ಒಂದು ಅತಿ ಅಸಹ್ಯವಾದ ದುಶ್ಚಟ ಪ್ರಾರಂಭವಾಯಿತು.

ಅದೇ ಎಲ್ಲಿ ಬೇಕಂದರಲ್ಲಿ ಈ ಕೆಂಪು
ನ್ನು ಉಗುಳಿ, ಕಟ್ಟಡ ಮೂಲೆ
ಬದಿಯ ಜಾಗೆ ಎಲ್ಲದರ ರೂಪ
– ಅಸಂಸ್ಕಾರ ಒಂದು
ರಂಭವಾಯಿತು. ನಗರ ಎಷ್ಟೋ
ಕಟ್ಟಡಗಳಲ್ಲಿ ಈ ದುರ್ನಡತೆಯನ್ನು ತಪ್ಪಿಸಲು ದೇವರ ಮೊರೆ ಹೋಗಬೇಕಾಯಿತು– ಆ ಉಗುಳುವ ಸ್ಥಳಗಳಲ್ಲಿ ದೇವತೆ ಚಿತ್ರಗಳನ್ನು ಸ್ಥಾಪಿಸಬೇಕಾಯಿತು......!!

ಇಂದು ಅಡಿಕೆ ತಂಬಾಕು ಮತ್ತಿನ್ನೇನೋ ಮಾದಕ ವಸ್ತುಗಳು ಹೊಂದಿದ 'ಗುಟಕಾ' ಬಂದಿದೆ. ಆ ಚೀಟಿ ಮೇಲೆ 'ತಂಬಾಕು ಸೇವನೆ ದೇಹಕ್ಕೆ ಹಾನಿಕರ' ಎಂದೂ ಬರೆದಿರುತ್ತಾರೆ. ಆದರೂ ಅದರ ಸೇವನೆಗೆ ವಯಸ್ಸಿನ ನಿರ್ಬಂಧವಿಲ್ಲ! ಪ್ರಮಾಣಕ್ಕೆ ಮಿತಿಯಿಲ್ಲ. ತಾಂಬೂಲ ನಂತರ ಹೊಗೆಸೊಪ್ಪು ಈ ಕೆಟ್ಟ ಹಾದಿಯಲ್ಲೆ ಬಂದುದು ಈ ಗುಟಕಾ. ಇನ್ನು ಏನೇನು ಬರಲಿಕ್ಕಿವೆಯೋ.

ಇದರಿಂದ ಆದ ಲಾಭ ಮಾತ್ರ ಅಡಿಕೆ ಬೆಳೆಗಾರರಿಗೆ. ಗುಟಕಾ ಹುಟ್ಟಿದ್ದು ಉತ್ತರ


ಆನೆಯ ಆಕಾರದ ಸುಣ್ಣದ ಕರಡಿಗೆ


ವಾದ್ಯಗಾರ–ಕುದುರೆ ಸವಾರ


ಕಾಚು ಗುಳಿಗೆಯ ಕರಡೆ

ಭಾರತದಲ್ಲಿ– ಅಡಿಕೆಯು ಬೆಳೆಯು ಹೆಚ್ಚು ಪ್ರಮಾಣ ಕನ್ನಡದ ನೆಲದಲ್ಲಿ. ಈ ಬೆಳೆಗಾರರಿಗೆ ಈ ಬೆಳೆಗೆ ಚಿನ್ನದ ಬೆಲೆ ಬಂತು! ಅಡಿಕೆ ಇಲ್ಲಿಯದು ಗುಟಕಾ ಚೀಟು ಅಲ್ಲಿ ಸಿದ್ಧವಾಯಿತು– ಇಂದು ಬೇರೆ ಬೇರೆ ಸ್ಥಳಗಳಲ್ಲಿಯೂ ಅದು ಸಿದ್ಧವಾಗುತ್ತಿದೆ.

ಈ ಚೀಟು ಸಂಸ್ಕೃತಿಯ ಬಗ್ಗೆ ಒಂದು ಮಾತನ್ನು ಹೇಳುವದು ಸಮಂಜಸ ಅನಿಸುತ್ತದೆ. ಅಡಿಕೆ ಚೀಟು ಪ್ರಥಮ ಬಾರಿಗೆ ಪ್ರಾರಂಭವಾದುದು ಮುಂಬೈಯಲ್ಲಿ. ಉಡುಪಿಯ ಉಪಾಧ್ಯಾಯ ಎಂಬುವರಿಂದ. 'ಮೈಸೂರು ಸುಪಾರಿ' ಎಂದು ಅದಕ್ಕೆ ನಾಮಕರಣ. ಬಟರ ಪೇಪರಿನಲ್ಲಿ ಕೈಯಲ್ಲೆ ಮಡಿಚಿ ಕಟ್ಟಿದ ಚೀಟು. ಒಳಗಿದ್ದುದು ಸುವಾಸಿತ ಅಡಿಕೆ ಪುಡಿ. ಪ್ರಾರಂಭವಾದುದು ಅಲ್ಪ ಪ್ರಮಾಣದಲ್ಲಿಯೇ. ಆದರೆ ಆ ಮಹಾನಗರದಲ್ಲಿ ಅದರ ಬೇಡಿಕೆ ದಿನದಿನಕ್ಕೆ ಬೆಳೆಯುತ್ತಲೇ ಹೋಯಿತು. ಕೈಯಿಂದಲೇ ಸಿದ್ಧವಾಗುತ್ತಿದ್ದ ಆ ಚೀಟನ್ನು ಕಟ್ಟಲು ಯಂತ್ರೋಪಕರಣಗಳನ್ನು ಸಿದ್ಧ ಮಾಡಲು, ಉಪಾಧ್ಯಾಯರು ಪರದೇಶಕ್ಕೆ ಹೋದ ನೆನಪು ಮಾತ್ರ ಇದೆ– ಮೈಸೂರು ಸುಪಾರಿಯ ನಂತರ ಬಂದುದು 'ಮಿಲನ್ ಸುಪಾರಿ' ಎಂಬುದು. ಅದೂ ಆಗ ಕೈಯಿಂದಲೇ ಕಟ್ಟಿದ ಚೀಟು ಚೀಲದಾಕಾರದಲ್ಲಿ. ಸ್ವಯಂ ಚಾಲಿತ ಯಂತ್ರದಲ್ಲಿ ಸಿದ್ಧವಾದ ಚೀಟನ್ನು ನಾನು ನೋಡಿದ್ದು ಹುಬ್ಬಳ್ಳಿಯಲ್ಲಿ, 'ಉಪಕಾರ ಸುಪಾರಿ'ಯಾಗಿ.

## ತಾಂಬೂಲ ಸಂಸ್ಕೃತಿಯೊಂದಿ... ಕಲೆಯ ಸಂಸ್ಕಾರ

ತಾಂಬೂಲದ ರುಚಿಗೆ, ಆರೋಗ... ಪ್ರಣಯ ಸಂದರ್ಭಕ್ಕೆ– ಅನುಕ... ಮಸಾಲೆ ಜಿನಸಿಗಳನ್ನು ಆ... ಉಪಯೋಗಿಸಿದಂತೆ– ತಾ...ನ್ನು ಅರ್ಪಿಸಲೂ ಕಲಾಪ...ವಾದ ಉತ್ತಮ ಸಲಕರಣೆಗಳು ಸಿ...ವಾದುವು. ಮೊದ ಮೊದಲು ...ಯಲ್ಲೇ ಅರ್ಪಣೆ. ನಂತರ ಆ ತಟ್ಟೆ ನ...ನ್ನು ಹೊಂದಿತು. ಆಮೇಲೆ ತಟ್ಟೆ... ಬದಲು ಡಬ್ಬ ಬಂತು, ಡಬ್ಬದ ನಕ್ಷೆ ಸುಂದರ ರೂಪ ತಾಳತೊಡಗಿತು. ಪಶು– ಪಕ್ಷಿ, ದೇವ– ದೇವತೆಗಳು ನಕ್ಷೆಯ ವಸ್ತುಗಳಾದವು. ಗಿಳಿ, ನವಿಲುಗಳ ಆಕಾರದಲ್ಲಿ ಡಬ್ಬಗಳ ನಿರ್ಮಾಣವಾದವು, ಮೇಲೆ ಈ ಆಕಾರವಾದರೆ ಮಧ್ಯ ಅಡಿಕೆ ಮತ್ತು ಮಸಾಲಿ ಜಿನಸಿಗಳನ್ನು ಇಡಲು ಖಾನೆಗಳು. ಅದರೊಟ್ಟಿಗೇ ಸುಣ್ಣಕ್ಕೂ ಸ್ಥಾನ. ಕೆಳಗೆ ವೀಳ್ಯದೆಲೆಗೆ ಸ್ಥಳ. ಈ ಅನುಕೂಲತೆಯಿಂದ ನಕ್ಷೆಗಳು, ಮಾಧ್ಯಮ ವಿವಿಧ ರೀತಿಯ ರೂಪತಾಳಿದವು.

ಕೆಲವೆಡೆ ಸುಣ್ಣಕ್ಕೆ ಪ್ರತ್ಯೇಕ ಚಿಕ್ಕ ಡಬ್ಬಿ. ಅದರ ನಕ್ಷೆಯೂ ವಿವಿಧ. ಅಂತೆಯೇ ಸುಣ್ಣ ಹಚ್ಚುವ ಕಡ್ಡಿಗೂ ಅನೇಕ ತರದ ನಕ್ಷೆ.

ಈ ಎಲ್ಲಕ್ಕೂ ಕಲಶವಿಟ್ಟಂತೆ ಅಡಿಕೆ ತುಂಡು ಮಾಡುವ 'ಅಡಕೋತು'



ಚಂಚಿ, ವಿವಿಧ ಅಡಕೋತುಗಳು

(ಅಡಿಕೆ+ಒತ್ತು) ಹೊಂದಿರುವ ನಕ್ಷೆಗಳನ್ನು ವರ್ಣಿಸುವದೇ ಅಸಾಧ್ಯದ ಮಾತು. ಮನುಷ್ಯ, ದೇವತೆಗಳು, ಪಶುಪಕ್ಷಿಗಳು, ಇವೆಲ್ಲ ಆ ನಕ್ಷೆಗಳಲ್ಲಿ ಅಡಕವಾಗಿರುವ ವಸ್ತುಗಳು. ಈ ಲೋಹ ಶಿಲ್ಪಿಗಳಿಗೆ– ವಾತ್ಸಾಯನನ ಸ್ಫೂರ್ತಿಯೋ ಏನೋ 'ಮಿಥುನ' ಚಿತ್ರಗಳು ಅಡಕವಾಗಿವೆ. ಇಂಥ ಮಿಥುನ ನಕ್ಷೆಗಳು– ನವದಂಪತಿಗಳಿಗೆ ಪ್ರಥಮ ರಾತ್ರಿಗೆ ಅನುಕೂಲವಾಗದಿರುತ್ತವೆಯೆ? ಇಂದು ಈ ಸಂದರ್ಭ ಬದಲಾಗಿದೆ.

ತಾಂಬೂಲ ಸಂಸ್ಕೃತಿ ಉಳಿದಿದೆ, ಆದರೆ ಸಂಬಂಧಿಸಿದ ಕಲಾಕೃತಿಗಳ ನಿರ್ಮಾಣ ಮಾತ್ರ ನಶಿಸಿ ಹೋಗಿದೆ, ಆದರೆ ಆ ವಸ್ತುಗಳೆಲ್ಲ ಪ್ರಾಚ್ಯ ವಸ್ತು ಸಂಗ್ರಹಾಲಯದ ಸೊತ್ತಾಗಿದೆ.



ಪಕ್ಷಿ ಮುಖ ಅಡಕೋತು
ಮಹಾರಾಷ್ಟ್ರ, 19ನೇ ಶತಮಾನ

## ಅಡಕೋತುಗಳ ತವರು

ಅಲ್ಲಲ್ಲಿಯ ಪ್ರಾಚ್ಯ ವಸ್ತು ಸಂಗ್ರಹಾಲಯಗಳಲ್ಲಿ ಹಿಂದಿನ ಕಾಲದ ಅಡಕೋತುಗಳು ಅಡಕವಾಗಿರಬಹುದು. ಆದರೆ ಪುಣೆಯ ರಾಜಾ ದಿನಕರ ಕೇಳಕರ್ ವಸ್ತು ಸಂಗ್ರಹಾಲಯದಲ್ಲಿರುವಷ್ಟು 'ಸಂಗ್ರಹ' ಮಾತ್ರ ಇನ್ನಾವ ಸಂಗ್ರಹಾಲಯದಲ್ಲಿ ಇರಲಾರವು ಎಂದು ಹೇಳಬಹುದು!

ನಿಜ ಇಂದು ಈ ಸಂಗ್ರಹಾಲಯ ಸರಕಾರದ ಆಡಳಿತಕ್ಕೆ ಸೇರಿರಬಹುದು. ಆದರೆ ಈ ಎಲ್ಲ ವಸ್ತುಗಳ ಶೇಖರಣೆ, ಒಬ್ಬ ವ್ಯಕ್ತಿಯ ಪರಿಶ್ರಮದ ಫಲ, ಶ್ರದ್ಧೆಯ ಪ್ರತೀಕ– ಇಲ್ಲಿ ತಾಂಬೂಲ ಡಬ್ಬಿಗಳ ವಿವಿಧ ನಕ್ಷೆಗಳ ಸಂಗ್ರಹ 150ಕ್ಕೂ ಮೇಲ್ಪಟ್ಟಿದ್ದರೆ, ಅಡಕೋತುಗಳು ಇನ್ನೂ ಹೆಚ್ಚಾಗಿವೆ. ಅವುಗಳನ್ನೆಲ್ಲ ಶಬ್ದಗಳಲ್ಲಿ ವರ್ಣಿಸುವದು ತುಂಬಾ ಕಷ್ಟ.



ಮೀನಿನಾಕಾರದ ಡಬ್ಬ
ಮಹಾರಾಷ್ಟ್ರ, 18ನೇ ಶತಮಾನ



ನವಿಲಿನಾಕಾರದ ಸುಣ್ಣದ ಕರಡಿಗೆ
ಮಹಾರಾಷ್ಟ್ರ, 18ನೇ ಶತಮಾನ



ಸುಣ್ಣ ಹಚ್ಚುವ ಕಡ್ಡಿ

## ಪುಣೆಯ ಕೇಳಕರ ವಸ್ತು ಸಂಗ್ರಹಾಲಯ

ಈ ವಸ್ತು ಸಂಗ್ರಹಾಲಯ ನಿರ್ಮಾಣಗೊಂಡು ಈ ರೂಪ ತಾಳಿದ್ದೂ ಒಬ್ಬರೇಒಬ್ಬ ವ್ಯಕ್ತಿಯಿಂದ. ದಿ. ಡಾ. ದಿನಕರ ಕೇಳಕರರಿಗೆ ವಿದ್ಯಾರ್ಥಿ ಇದ್ದಾಗಿನಿಂದಲೇ ಹಳೆಯ ವಸ್ತುಗಳನ್ನು ಕಲೆಹಾಕುವ ಗೀಳು. ಇವರ ಈ ಹವ್ಯಾಸಕ್ಕೆ ನೀರೆರೆದವರು ಅಂದು ಪ್ರಸಿದ್ಧ ಮರಾಠಿ ನಾಟಕಕಾರರಾಗಿದ್ದ ಕವಿ, ರಾಮ ಗಣೇಶ ಗಡಕರಿಯವರು. ಕ್ರಿ.ಶ. 1920 ರಷ್ಟು ಹಿಂದೆಯೇ ಈ ಸಂಗ್ರಹ ಪ್ರಾರಂಭವಾಗಿದ್ದರೂ, ಅದಕ್ಕೊಂದು ಮೂರ್ತ ಸ್ವರೂಪ ಬರಲು ಇನ್ನೆರಡು ದಶಕಗಳೇ ಬೇಕಾದವು. ಇವರ ಜೀವನದಲ್ಲಿ ನಡೆದ ಒಂದು ಆಘಾತವೇ ಇವರನ್ನು ಪೂರ್ಣವಾಗಿ ಈ ಕಾರ್ಯಕ್ಕೆ ತೊಡಗಿಸಲು ಕಾರಣವಾಯಿತೋ ಏನೋ.

ಇದ್ದ ಒಬ್ಬನೇ ಮಗ ತೀರಿ ಹೋದ. ಅಂದಿನಿಂದ ಕೇಳಕರರು ಪೂರ್ಣವಾಗಿ ತಮ್ಮನ್ನು ಈ ಕಾರ್ಯಕ್ಕೇ ಸಮರ್ಪಿಸಿಕೊಂಡರು. ಹಳೆಯ ವಸ್ತುಗಳನ್ನು ಕಲೆ ಹಾಕುವದು ಅಷ್ಟು ಹಗುರವಾದ ಕೆಲಸವೂ ಅಲ್ಲ. ತಿರುಗಾಡಬೇಕು. ಕಾಂಗ್ರೆಸ್ ಹಿರಿಯ ಮುಂದಾಳಾಗಿದ್ದ ದಿ. ಎಸ್.ಕೆ. ಪಾಟೀಲರು ರೈಲು ಮಂತ್ರಿಯಾಗಿದ್ದಾಗ ಭಾರತದಲ್ಲಿ ಎಲ್ಲಿ ಬೇಕೆಂದರಲ್ಲಿಗೆ ತಿರುಗಲು ಪ್ರಥಮ ದರ್ಜೆಯ ರೈಲು ಪಾಸನ್ನು ನೀಡಿ ಗೌರವಿಸಿದರು. ಕೇಳಕರ ಅವರು 90 ರ ವಯಸ್ಸಿನಲ್ಲಿದ್ದಾಗ 20ರ ತರುಣನ ಕಾರ್ಯ ಮಾಡಿದರೆಂದೇ ಇಂಥ ಉತ್ಕೃಷ್ಟ ವಸ್ತು ಸಂಗ್ರಹಾಲಯ ತಲೆ ಎತ್ತಿ ನಿಂತಿದೆ.

ರಾಜಾ ಕೇಳಕರ ವಸ್ತು ಸಂಗ್ರಹಾಲಯ ಎಂದು ತೀರಿ ಹೋದ ತಮ್ಮ ಮಗನ ಹೆಸರನ್ನೆ ಇರಿಸಿ 1975 ರಷ್ಟು ಹೊತ್ತಿಗೆ ಸಂಗ್ರಹಾಲಯವನ್ನು ಮಹಾರಾಷ್ಟ್ರ ಸರಕಾರಕ್ಕೆ ಒಪ್ಪಿಸಿದ್ದಾರೆ.

ಈ ಲೇಖನದಲ್ಲಿ ಉಪಯೋಗಿಸಿದ ಹೆಚ್ಚಿನ ಚಿತ್ರಗಳೆಲ್ಲ, ಈ ಸಂಗ್ರಹಾಲಯದ ಪ್ರಕಟಣೆಯಿಂದಲೇ ಆರಿಸಿಕೊಂಡುದು. ❐